# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 157 |
| ಸದಸ್ಯರ ಹೆಸರು | ಶ್ರೀ ಯು.ಬಿ ವೆಂಕಟೇಶ್ [ನಾಮ ನಿರ್ದೇಶನ ಹೊಂದಿದವರು] |
| ಉತ್ತರಿಸಬೇಕಾದ ದಿನಾಂಕ | 01-02-2021 |
| ಉತ್ತರಿಸಬೇಕಾದ ಸಚಿವರು | ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ ಸಕಾಲ ಸಚಿವರು. |

| ಪ್ರಶ್ನೆ | ಉತ್ತರ |
|---|---|
| **ಅ)** ಕೋವಿಡ್-19 ಹಿನ್ನೆಲೆಯಲ್ಲಿ ರಾಜ್ಯದಲ್ಲಿ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣವನ್ನು ತೊರೆದಿರುವ ಮಕ್ಕಳ ಸಂಖ್ಯೆ ಎಷ್ಟು; | ಸರ್ಕಾರದ ಸುತ್ತೋಲೆ ಸಂಖ್ಯೆ: ನಅಇ 202 ಎಂಡಬ್ಲ್ಯೂಸಿ 2019, ದಿನಾಂಕ:14-12-2020 ಮತ್ತು ಕ.ಪಂ.ರಾ.ಅ/ಅ/79/2020(ಭಾಗ-1), ದಿನಾಂಕ:29-12-2020 ಹಾಗೂ ರಾಜ್ಯ ಯೋಜನಾ ನಿರ್ದೇಶಕರು, ಸಮಗ್ರ ಶಿಕ್ಷಣ ಕರ್ನಾಟಕ, ಬೆಂಗಳೂರು ಇವರ ಸುತ್ತೋಲೆ ಸಂಖ್ಯೆ:13866 /ಸಶಿಕ/ ಒ.ಎಸ್‌ಸಿ /ಸ್ಥ.ಪ್ರಾ/2020-21, ದಿನಾಂಕ:30-12-2020ಗಳಂತೆ ಪ್ರಸ್ತುತ ಸಾಲಿನಲ್ಲಿ ಶಾಲೆಗಳಿಂದ ಹೊರಗುಳಿದ ಮಕ್ಕಳನ್ನು ಗುರುತಿಸಲು ಸಮೀಕ್ಷೆ ನಡೆಸಿ ಅವರನ್ನು ಮುಖ್ಯ ವಾಹಿನಿಗೆ ಕರೆತರಲಾಗುವ ಕಾರ್ಯ ಪ್ರಗತಿಯಲ್ಲಿರುತ್ತದೆ.<br><br>ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ಇವರ ಸುತ್ತೋಲೆ ಸಂಖ್ಯೆ:ಎಡಿಎಂ2(4) ಮ.ಶಿ.ಹ-22/2020-21, ದಿನಾಂಕ:08-01-2021ರಂತೆ ಶಾಲೆಗಳಿಂದ ಹೊರಗುಳಿದ ಮಕ್ಕಳಿಗೆ ಶೈಕ್ಷಣಿಕ ವರ್ಷದ ಮಧ್ಯದಲ್ಲಿಯೂ ಸಹ ಶಾಲೆಗೆ ಪ್ರವೇಶ ನೀಡಲು ತಿಳಿಸಲಾಗಿದೆ. |
| **ಆ)** ಶಿಕ್ಷಣವನ್ನು ಅರ್ಧಕ್ಕೆ ಮೊಟಕುಗೊಳಿಸಿರುವ ಮಕ್ಕಳನ್ನು ಮನಃ ಶಾಲೆಗಳಿಗೆ ಕರೆತರುವಲ್ಲಿ ಸರ್ಕಾರ ಕೈಗೊಂಡಿರುವ ಕ್ರಮಗಳೇನು ? | 1. ಶಾಲೆಗೆ ದಾಖಲಾಗದ ಮಕ್ಕಳಿಗಾಗಿ ಕಾರ್ಯಕ್ರಮಗಳು:<br>• 6 ತಿಂಗಳ ವಸತಿಸಹಿತ ವಿಶೇಷ ತರಬೇತಿ.<br>• 12 ತಿಂಗಳ ವಸತಿಸಹಿತ ವಿಶೇಷ ತರಬೇತಿ.<br>• 6 ತಿಂಗಳ ವಸತಿರಹಿತ ವಿಶೇಷ ತರಬೇತಿ.<br>• 12 ತಿಂಗಳ ವಸತಿರಹಿತ ವಿಶೇಷ ತರಬೇತಿ.<br><br>2. ಶಾಲೆಯಿಂದ ಮಕ್ಕಳು ಹೊರಗುಳಿದ ಮಕ್ಕಳಿಗಾಗಿ ಕಾರ್ಯತಂತ್ರಗಳು:<br>• ಋತುಮಾನ ವಸತಿಯುತ ಶಾಲೆಗಳು (Seasonal Residential Schools)<br>• ಟೆಂಟ್ ಶಾಲೆಗಳು (Tent Schools)<br>• ಬಾಲ ಕಾರ್ಮಿಕ ಮಕ್ಕಳಿಗಾಗಿ ಕಾರ್ಯತಂತ್ರ (National Child Labour Project [NCLP] )<br>• ಸಂಚಾರಿ ಶಾಲೆಗಳು(Mobile Schools)<br>• ಗೃಹಾಧಾರಿತ ಮಕ್ಕಳ ಶಿಕ್ಷಣ (Home |

| | |
|---|---|
| | Based Education)<br>• 6 ತಿಂಗಳ ಅವಧಿಯ ಸ್ವಯಂಸೇವಕ ಸಹಿತ ಶಾಲಾಧಾರಿತ ವಿಶೇಷ ತರಬೇತಿ (School Based Training with Volunteers) |

ಇಹಿ 29 ಪಿಜಿಸಿ 2021

[ ಎಸ್.ಸುರೇಶ್ ಕುಮಾರ್]
ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ
ಸಕಾಲ. ಸಚಿವರು.

# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 109

ಸದಸ್ಯರ ಹೆಸರು : ಶ್ರೀ ಕವಟಗಿಮಠ ಮಹಾಂತೇಶ ಮಲ್ಲಿಕಾರ್ಜುನ (ಸ್ಥಳೀಯ ಸಂಸ್ಥೆಗಳ ಕ್ಷೇತ್ರದಿಂದ ಚುನಾಯಿತರಾದವರು)

ಉತ್ತರಿಸಬೇಕಾದ ದಿನಾಂಕ : 01.02.2021

ಉತ್ತರಿಸುವ ಸಚಿವರು : ಮಾನ್ಯ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ ಸಕಾಲ ಸಚಿವರು

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದ ಸರ್ಕಾರಿ ಮತ್ತು ಅನುದಾನಿತ ಶಾಲೆಗಳ ಮಕ್ಕಳಿಗೆ ಬೆಳಗಿನ ಉಪಹಾರ ನೀಡುವ ಯೋಜನೆ ಜಾರಿಯಲ್ಲಿದೆಯೇ; | ರಾಜ್ಯದ 276 ಸರ್ಕಾರಿ ಕರ್ನಾಟಕ ಪಬ್ಲಿಕ್ ಶಾಲೆಗಳಲ್ಲಿನ ಪೂರ್ವ ಪ್ರಾಥಮಿಕ ತರಗತಿಗಳಲ್ಲಿ (ಎಲ್.ಕೆ.ಜಿ ಮತ್ತು ಯು.ಕೆ.ಜಿ) ವ್ಯಾಸಂಗ ಮಾಡುತ್ತಿರುವ ಮಕ್ಕಳಿಗೆ ಮಧ್ಯಾಹ್ನ ಉಪಹಾರ ಯೋಜನೆಯಡಿ, ಮಹಿಳಾ ಮತ್ತು ಮಕ್ಕಳ ಕಲ್ಯಾಣ ಇಲಾಖೆಯ ವತಿಯಿಂದ ನೀಡಲಾಗುತ್ತಿರುವ ಆಹಾರ ಪ್ರಮಾಣ ಮತ್ತು ಘಟಕ ವೆಚ್ಚಕ್ಕೆ ಅನುಗುಣವಾಗಿ, ಬೆಳಗಿನ ಉಪಹಾರವನ್ನು 2019-20ನೇ ಸಾಲಿನಿಂದ ನೀಡಲು ಸರ್ಕಾರದ ಆದೇಶ ಸಂಖ್ಯೆ: ಇಡಿ 07 ಎಂಎಂಎಸ್ 2019 ದಿನಾಂಕ: 13/08/2019 ರನ್ವಯ ಅನುಮತಿ ನೀಡಲಾಗಿದೆ.<br><br>ಸರ್ಕಾರಿ ಕರ್ನಾಟಕ ಪಬ್ಲಿಕ್ ಶಾಲೆಗಳಲ್ಲಿನ ಪೂರ್ವ ಪ್ರಾಥಮಿಕ ತರಗತಿಗಳ ಹೊರತಾಗಿ ಉಳಿದ ಯಾವುದೇ ಸರ್ಕಾರಿ ಮತ್ತು ಅನುದಾನಿತ ಶಾಲೆಗಳ ಮಕ್ಕಳಿಗೆ ಬೆಳಗಿನ ಉಪಹಾರ ನೀಡುವ ಯೋಜನೆ ಸರ್ಕಾರದಿಂದ ಜಾರಿಯಲ್ಲಿರುವುದಿಲ್ಲ. |
| ಆ) | ಇದ್ದಲ್ಲಿ ಎಷ್ಟು ಸರ್ಕಾರಿ ಮತ್ತು ಅನುದಾನಿತ ಶಾಲೆಗಳಿಗೆ ಈ ಸೌಲಭ್ಯವನ್ನು ಒದಗಿಸಲಾಗುತ್ತಿದೆ. | ರಾಜ್ಯದ 276 ಸರ್ಕಾರಿ ಕರ್ನಾಟಕ ಪಬ್ಲಿಕ್ ಶಾಲೆಗಳಲ್ಲಿನ ಪೂರ್ವ ಪ್ರಾಥಮಿಕ ತರಗತಿಗಳಲ್ಲಿ (ಎಲ್.ಕೆ.ಜಿ ಮತ್ತು ಯು.ಕೆ.ಜಿ) ವ್ಯಾಸಂಗ ಮಾಡುತ್ತಿರುವ ಮಕ್ಕಳಿಗೆ ಮಧ್ಯಾಹ್ನ ಉಪಹಾರ ಯೋಜನೆಯಡಿ ಬೆಳಗಿನ ಉಪಹಾರವನ್ನು ಒದಗಿಸಲಾಗಿದೆ. |
| ಇ) | ಸದರಿ ಯೋಜನೆಯನ್ನು ಖಾಸಗಿ ಶಾಲೆಗಳಿಗೂ ವಿಸ್ತರಿಸುವ ಉದ್ದೇಶ ಸರ್ಕಾರಕ್ಕಿದೆಯೇ? | ಸದರಿ ಯೋಜನೆಯನ್ನು ಖಾಸಗಿ ಶಾಲೆಗಳಿಗೆ ವಿಸ್ತರಿಸುವ ಯಾವುದೇ ಪ್ರಸ್ತಾವನೆ ಸರ್ಕಾರದ ಮುಂದೆ ಇರುವುದಿಲ್ಲ. |

ಇಪಿ 04 ಎಂಎಂಎಸ್ 2021

S. S—

(ಎಸ್. ಸುರೇಶ್ ಕುಮಾರ್)

ಪ್ರಾಥಮಿಕ ಮತ್ತು ಪ್ರೌಢಶಿಕ್ಷಣ ಸಚಿವರು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 105
ಸದಸ್ಯರ ಹೆಸರು : ಶ್ರೀ ಪ್ರಕಾಶ್ ಕೆ ರಾಥೋಡ್(ನಾಮ ನಿರ್ದೇಶನ ಹೊಂದಿದವರು)
ಉತ್ತರಿಸುವ ದಿನಾಂಕ : 01-02-2021.
ಉತ್ತರಿಸುವ ಸಚಿವರು : ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ ಸಕಾಲ ಸಚಿವರು

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಖಾಸಗಿ ವಿದ್ಯಾ ಸಂಸ್ಥೆಗಳು ಅಗ್ನಿಶಾಮಕ ಹಾಗೂ ಕಟ್ಟಡ ಸುಸ್ಥಿತಿ ದೃಢೀಕರಣ ಪತ್ರವನ್ನು ಪಡೆಯಲು ಇಚ್ಛಿಸಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಹೌದು<br><br>ಮಾನ್ಯ ಸರ್ವೋಚ್ಛ ನ್ಯಾಯಾಲಯವು ರಿಟ್ ಅರ್ಜಿ (ಸಿವಿಲ್) ಸಂಖ್ಯೆ: 483/2004 ದಿನಾಂಕ: 13-04-2009ರ ತೀರ್ಪಿನಲ್ಲಿ ಶಾಲಾ ಕಾಲೇಜುಗಳ ಕಟ್ಟಡವು ಸುರಕ್ಷಿತ ಮತ್ತು ಎಲ್ಲಾ ಕೋನಗಳಿಂದ ಸುಭದ್ರವಾಗಿದೆ ಎಂಬುದನ್ನು ಮತ್ತು National Building code ರಲ್ಲಿನ ಸುರಕ್ಷತಾ ನಿಬಂಧನೆಗಳನ್ವಯ ಕಟ್ಟಡ ನಿರ್ಮಿಸಿರುವುದನ್ನು ಮತ್ತು ಅಗ್ನಿಶಾಮಕ ಉಪಕರಣಗಳನ್ನು ಅಳವಡಿಸಿಕೊಂಡಿರುವ ಬಗ್ಗೆ ಸಕ್ಷಮ ಪ್ರಾಧಿಕಾರದಿಂದ ನೀಡಿರುವ ಪ್ರಮಾಣ ಪತ್ರ ಪಡೆದಿರುವುದನ್ನು ಖಚಿತಪಡಿಸಿಕೊಳ್ಳಲು ಎಲ್ಲಾ ರಾಜ್ಯ ಸರ್ಕಾರಗಳು ಮತ್ತು ಕೇಂದ್ರಾಡಳಿತ ಪ್ರದೇಶಗಳಿಗೆ ಸೂಚಿಸಲಾಗಿದೆ.<br><br>ಸರ್ಕಾರದ ಅಧಿಸೂಚನೆ ಸಂಖ್ಯೆ:ಇಡಿ 709 ಪಿಜಿಸಿ 2017 ದಿನಾಂಕ:08-03-2018ರ ಅಧಿಸೂಚನೆಯಲ್ಲಿಯೂ ಸಹ ಹೊಸ ಶಾಲೆ ಪ್ರಾರಂಭದ ನೋಂದಣಿ ಅನುಮತಿಗೆ ಕಟ್ಟಡ ಸುರಕ್ಷತೆಗೆ ಮತ್ತು ಅಗ್ನಿ ಸುರಕ್ಷತೆ ಪ್ರಮಾಣ ಪತ್ರವನ್ನು ಸಕ್ಷಮ ಪ್ರಾಧಿಕಾರದಿಂದ ಪಡೆಯುವುದು ಕಡ್ಡಾಯವಾಗಿರುತ್ತದೆ.<br><br>ಸರ್ಕಾರದ ಸುತ್ತೋಲೆ ಸಂಖ್ಯೆ:ಇಪಿ 46 ಎಸ್‌ಹೆಚ್‌ಹೆಚ್ 2020 ದಿನಾಂಕ:10-11-2020ರಲ್ಲಿ ರಾಜ್ಯದಲ್ಲಿನ ಖಾಸಗಿ ಅನುದಾನಿತ/ ಅನುದಾನರಹಿತ ಪ್ರಾಥಮಿಕ, ಪ್ರೌಢ ಶಾಲೆ ಮತ್ತು ಪದವಿ ಪೂರ್ವ ಕಾಲೇಜುಗಳಲ್ಲಿ ಹೊಸ ಭಾಷೆ, ಸಂಯೋಜನೆ ಹಾಗೂ ಹೆಚ್ಚುವರಿ ವಿಭಾಗಗಳನ್ನು ಅನುಮತಿಸುವ ಸಂದರ್ಭದಲ್ಲಿ ಕಟ್ಟಡ ಸುರಕ್ಷತಾ ಪ್ರಮಾಣ ಪತ್ರದ ಅಗತ್ಯತೆಯನ್ನು ನಿಗಧಿಪಡಿಸಿದೆ. |

| | | |
|---|---|---|
| ಆ) | ದೃಢೀಕರಣ ಪತ್ರವು ಖಾಸಗಿ ವಿದ್ಯಾ ಸಂಸ್ಥೆಗಳಿಗೆ ಮಾತ್ರ ಅನ್ವಯಿಸುತ್ತದೆಯೇ; ಅಥವಾ ಸರ್ಕಾರಿ ವಿದ್ಯಾಸಂಸ್ಥೆಗೂ ಅನ್ವಯಿಸುತ್ತದೆಯೇ? (ಸಂಪೂರ್ಣ ವಿವರ ಒದಗಿಸುವುದು) | ಸರ್ಕಾರಿ ವಿದ್ಯಾ ಸಂಸ್ಥೆಗಳ ಕಟ್ಟಡಗಳಿಗೆ ಮಾನ್ಯ ಸರ್ವೋಚ್ಚ ನ್ಯಾಯಾಲಯವು ರಿಟ್ ಅರ್ಜಿ (ಸಿವಿಲ್) ಸಂಖ್ಯೆ: 483/2004 ದಿನಾಂಕ: 13-04-2009ರ ತೀರ್ಪಿನಂತೆ National Building Code ರಲ್ಲಿನ ಸುರಕ್ಷತಾ ನಿಬಂಧನೆಗಳು ಅನ್ವಯವಾಗುತ್ತದೆ. ಖಾಸಗಿ ವಿದ್ಯಾ ಸಂಸ್ಥೆಗಳ ಕಟ್ಟಡಗಳಿಗೆ ಲೋಕೋಪಯೋಗಿ ಇಲಾಖೆಯ ಕಾರ್ಯಪಾಲಕ ಇಂಜಿನಿಯರ್‌ರವರಿಂದ ಸ್ಥಿರತೆ ಪ್ರಮಾಣ ಪತ್ರವನ್ನು ಪಡೆಯಲಾಗುತ್ತಿದೆ. |

**ಸಂಖ್ಯೆ: ಇಪಿ 20 ಡಿಜಿಡಬ್ಲ್ಯೂ 2021**

(ಎಸ್. ಸುರೇಶ್ ಕುಮಾರ್)
ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ ಸಕಾಲ ಸಚಿವರು.